


# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## **ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 153 (1132)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಕೃಷಿ ಸಚಿವರು

ವಿಷಯ : ಬ್ರಹ್ಮಾವರ ಕೃಷಿ ಸಂಶೋಧನಾ ಕೇಂದ್ರದ ಅಧೀನದ ಭೂಮಿಯನ್ನು ಒತ್ತುವರಿಯಿಂದ ರಕ್ಷಿಸುವ ಕುರಿತು

(ಅ) ಉಡುಪಿ ಜಿಲ್ಲೆಯ ಬ್ರಹ್ಮಾವರ ವಲಯ ಕೃಷಿ ಸಂಶೋಧನಾ ಕೇಂದ್ರವು ಯಾವಾಗ ಅಸ್ತಿತ್ವಕ್ಕೆ ಬಂದಿದೆ; ಅದರ ಅಧೀನದ ಭೂಮಿಯ ವಿಸ್ತೀರ್ಣ ಎಷ್ಟು; ಬೀಜೋತ್ಪಾದನಾ ಕೇಂದ್ರ ಮತ್ತು ಕೃಷಿ ಸಂಶೋಧನಾ ಕೇಂದ್ರದ ಉದ್ದೇಶಕ್ಕಾಗಿ ಬಳಸಲಾಗುತ್ತಿರುವ ಭೂಮಿಯ ವಿಸ್ತೀರ್ಣವೆಷ್ಟು; ಖಾಲಿಯಿರುವ ಭೂಮಿಯ ವಿಸ್ತೀರ್ಣವೆಷ್ಟು; ಇತ್ತೀಚಿನ ವರ್ಷಗಳಲ್ಲಿ ಕೇಂದ್ರದಿಂದಕೈಗೊಂಡಪ್ರಮುಖ ಸಂಶೋಧನಾ ಚಟುವಟಿಕೆಗಳು ಯಾವುವು;

(ಆ) ಬ್ರಹ್ಮಾವರ ವಲಯ ಕೃಷಿ ಸಂಶೋಧನಾ ಕೇಂದ್ರದ ಜಮೀನಿನ ಗಡಿಯನ್ನು ಗುರುತಿಸಲಾಗಿದೆಯೇ; ಬೇಲಿಯನ್ನು ಹಾಕಲಾಗಿದೆಯೇ; ಒತ್ತುವರಿಯಾದ ಭೂಮಿಯ ವಿಸ್ತೀರ್ಣವೆಷ್ಟು; ಗಡಿ ಗುರುತಿಸಿ ಬೇಲಿಯನ್ನು ನಿರ್ಮಿಸದೇ ಇರುವುದರಿಂದ ಸಂಶೋಧನಾ ಕೇಂದ್ರದ ಭೂಮಿಯ ಒತ್ತುವರಿಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಬ್ರಹ್ಮಾವರ ವಲಯ ಕೃಷಿ ಸಂಶೋಧನಾ ಕೇಂದ್ರದ ಅಧೀನದಲ್ಲಿರುವ ವಿದ್ಯುತ್ ಮೋಟಾರ್‌ಗಳ ಸಂಖ್ಯೆ ಎಷ್ಟು; ಕಳೆದ ಮೂರು ವರ್ಷಗಳಲ್ಲಿ ಇವುಗಳ ನಿರ್ವಹಣಾ ವೆಚ್ಚವೆಷ್ಟು? (ಸ್ಥಾವರವಾರು, ವರ್ಷವಾರು ಮಾಹಿತಿಯನ್ನು ನೀಡುವುದು)